# ಕರ್ನಾಟಕ ವಿಧಾನ ಪರಿಷತ್ತು

ಸದಸ್ಯರ ಹೆಸರು : ಶ್ರೀ ಆರ್.ಬಿ. ತಿಮ್ಮಾಪೂರ (ವಿಧಾನ ಸಭೆಯಿಂದ ಚುನಾಯಿತರಾದವರು)

ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ : 719

ಉತ್ತರಿಸಬೇಕಾದ ದಿನಾಂಕ : 25.09.2020.

ಉತ್ತರಿಸಬೇಕಾದ ಸಚಿವರು : ಮಾನ್ಯ ಪಶುಸಂಗೋಪನೆ, ಹಜ್ ಹಾಗೂ ವಕ್ಫ್ ಸಚಿವರು.

| ಕ್ರ.ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ರಾಜ್ಯದಲ್ಲಿ ಜಾನುವಾರುಗಳು "ಚರ್ಮ ಗಂಟು ರೋಗ" ವೆಂಬ ರೋಗದಿಂದ ಬಳಲುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸರ್ಕಾರದ ಗಮನಕ್ಕೆ ಬಂದಿರುತ್ತದೆ. |
| ಆ | ಯಾವ ಯಾವ ಜಿಲ್ಲೆಗಳಲ್ಲಿ ಈ ರೋಗವು ವ್ಯಾಪಿಸುತ್ತಿದೆ; | ರಾಮನಗರ, ಶಿವಮೊಗ್ಗ, ಹಾಸನ, ಉಡುಪಿ, ಬೀದರ್, ಕೊಪ್ಪಳ, ರಾಯಚೂರು, ಯಾದಗಿರಿ, ಕಲ್ಬುರ್ಗಿ, ಉತ್ತರ ಕನ್ನಡ, ದಾವಣಗೆರೆ, ಹಾವೇರಿ ಮತ್ತು ವಿಜಯಪುರ. |
| ಇ | ಈ ರೋಗವನ್ನು ತಡೆಗಟ್ಟಲು ಸರ್ಕಾರ ಕೈಗೊಂಡ ಕ್ರಮಗಳೇನು; | ಸದರಿ ರೋಗವು ವೈರಾಣುಗಳಿಂದ ಹರಡುವ ಕಾಯಿಲೆಗಳಾಗಿದ್ದು, ಪ್ರಸ್ತುತ ಯಾವುದೇ ನಿರ್ದಿಷ್ಟ ಲಸಿಕೆ ಇರುವುದಿಲ್ಲ ಆದರೂ ಪಶು ಆರೋಗ್ಯ ಮತ್ತು ಜೈವಿಕ ಸಂಸ್ಥೆಯ ತಜ್ಞರ ಸಲಹೆಯ ಮೇರೆಗೆ ಮೇಕೆ ಸಿಡುಬು ಲಸಿಕೆಯನ್ನು ಜಾನುವಾರುಗಳಿಗೆ ಹಾಕಿಸುವುದರಿಂದ ಕಾಯಿಲೆಯನ್ನು ನಿಯಂತ್ರಿಸಬಹುದಾಗಿದ್ದು, ಈಗಾಗಲೇ 48150 ಜಾನುವಾರುಗಳಿಗೆ ಸಾಕಾಗುವಷ್ಟು ಲಸಿಕೆಯನ್ನು ವಿವಿಧ ಜಿಲ್ಲೆಗಳಿಗೆ ಪೂರೈಸಲಾಗಿದ್ದು, ಲಸಿಕೆಯನ್ನು ಹಾಕಲಾಗುತ್ತಿದೆ. ಮುಂದುವರೆದು, ಪಶು ಆರೋಗ್ಯ ಮತ್ತು ಜೈವಿಕ ಸಂಸ್ಥೆ, ಬೆಂಗಳೂರು ಇಲ್ಲಿ ಮೇಕೆ ಸಿಡುಬು ಲಸಿಕೆಯು ಉತ್ಪಾದನೆಯಾಗಿದ್ದು, ರೋಗೋದ್ರೇಕ ಕಾಣಿಸಿಕೊಂಡಿರುವ ಜಿಲ್ಲೆಗಳಿಗೆ ಸರಬರಾಜು ಮಾಡಲಾಗುವುದು. ರೋಗೋದ್ರೇಕ ಕಾಣಿಸಿಕೊಂಡಿರುವ |

| | | |
|---|---|---|
| | | ಜಿಲ್ಲೆಗಳಲ್ಲಿ ರೋಗಪೀಡಿತ ಜಾನುವಾರುಗಳಿಗೆ ಸೂಕ್ತ ಚಿಕಿತ್ಸೆಯನ್ನು ಸ್ಥಳೀಯ ಪಶುವೈದ್ಯರು ಮಾಡುತ್ತಿದ್ದಾರೆ. ರೋಗೋದ್ರೇಕ ಕಾಣಿಸಿಕೊಂಡ ಗ್ರಾಮಗಳಲ್ಲಿ ರೈತರಿಗೆ ಅರಿವು ಮೂಡಿಸಲು, ಜಾನುವಾರು ಆರೋಗ್ಯ ಶಿಬಿರಗಳನ್ನು ಏರ್ಪಡಿಸಲಾಗುತ್ತಿದೆ. ವೆಬಿನಾರ್ ಮೂಲಕ ಎಲ್ಲಾ ಪಶುವೈದ್ಯರಿಗೆ ತಾಂತ್ರಿಕ ವಿಚಾರಗಳನ್ನು ಹಾಗೂ ರೋಗನಿಯಂತ್ರಣ ಕ್ರಮಗಳ ಬಗ್ಗೆ ತಿಳಿಸಲಾಗಿದೆ. ಜಿಲ್ಲಾ ಮಟ್ಟದಲ್ಲಿ ತಾಂತ್ರಿಕ ವಿಚಾರ ಸಂಕಿರಣಗಳನ್ನು ಕೂಡ ಏರ್ಪಡಿಸಲಾಗಿದೆ. |
| ಈ | ಒಂದು ವೇಳೆ ಜಾನುವಾರುಗಳಿಗೆ ಸಾವು ಸಂಭವಿಸಿದರೆ ರೈತರಿಗೆ ನೀಡಬಹುದಾದ ಪರಿಹಾರಧನ ಎಷ್ಟು? (ಮಾಹಿತಿ ನೀಡುವುದು) | ಸದರಿ ರೋಗದಲ್ಲಿ ಮರಣದ ಪ್ರಮಾಣ ಅತಿ ಕಡಿಮೆ ಇರುತ್ತದೆ. ಸದರಿ ರೋಗದಿಂದ ಸಾವು ಸಂಭವಿಸಿದಲ್ಲಿ ರೈತರಿಗೆ ಪರಿಹಾರ ಧನ ನೀಡುವ ಯೋಜನೆ ಪ್ರಸ್ತುತ ಇರುವುದಿಲ್ಲ. |

ಪಸಂಮೀ ಇ-244 ಸಲೆವಿ 2020

ಪ್ರಭು ಬಿ. ಚವ್ಹಾಣ್
ಪಶುಸಂಗೋಪನೆ, ಹಜ್ ಮತ್ತು ವಕ್ಫ್ ಸಚಿವರು.